# ಈಸೂರಿನಲ್ಲಿ ಬೆಳಕಿಗೆ ಬಂದಿರುವ ಗಜಪೃಷ್ಠಾಕಾರದ ದೇವಲಯದ ವಾಸ್ತು ಅವಶೇಷ*

ಎಂ.ವಿ. ವಿಶ್ವೇಶ್ವರ್
ಸಿ.ಎಸ್. ಶೇಷಾದ್ರಿ

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಈಸೂರು ಹಲವು ಕಾರಣಗಳಿಂದ ಪ್ರಸಿದ್ಧವಾಗಿರುವ ಒಂದು ಗ್ರಾಮ. ರಾಷ್ಟ್ರಕೂಟರ ಕಾಲದ (ಕ್ರಿ.ಶ. ೮೫೦ರ ಸುಮಾರಿನ) ಶಾಸನ ಒಂದನ್ನು ಇಲ್ಲಿ ಇತ್ತೀಚೆಗೆ ಸಂಶೋಧಿಸಲಾಗಿದೆ. 'ಶ್ರೀ ಅರಸರ ಬೋದಕೋಜರ' ಎಂಬುವನು ಕೆಲವು ದೇವಾಲಯಗಳನ್ನು ನಿರ್ಮಿಸಿ, ಅದರ ಪೂಜಾದಿಗಳಿಗೆ ದಾನ ನೀಡಿದನೆಂದು, ಈ ಶಾಸನ ತಿಳಿಸುತ್ತದೆ. ಪ್ರಸ್ತುತ ಶಾಸನದಲ್ಲಿ ಉಲ್ಲೇಖಿತವಾಗಿರುವ ದೇವಾಲಯಗಳನ್ನು ಗುರುತಿಸುವ ಸಲುವಾಗಿ ನಡೆದ ಸ್ಥಳ ಪರಿಶೋಧನೆಯಲ್ಲಿ ಕೆಲವು ಗಮನಾರ್ಹ ಸಂಗತಿಗಳು ಬಳಕಿಗೆ ಬಂದಿವೆ. ಈಸೂರಿನ ಸಾಂಸ್ಕೃತಿಕ ಹಾಗೂ ವಾಸ್ತುನಿರ್ಮಾಣ ಚಟುವಟಿಕೆಗೆ ಸಂಬಂಧ ಪಟ್ಟಂತೆ ದೊರಕಿರುವ ಮಾಹಿತಿಯನ್ನು ಈ ಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ.

ಕೋಟೆ ಪ್ರದೇಶದಲ್ಲಿನ ಕಲ್ಲೇಶ್ವರ ದೇವಾಲಯ -ವಿರುವ ದಿಬ್ಬ ಇಲ್ಲಿನ ವಾಸ್ತು ಅವಶೇಷಗಳಲ್ಲಿ ಗಮನರ್ಹಾವಾದ್ದು. ಇದರ ಪರಿಸರದಲ್ಲಿಯೇ ಮೇಲೆ ಹೇಳಿದ ಶಾಸನ ದೊರಕಿರುವುದು. ಈ ದಿಬ್ಬದಲ್ಲಿ ಗಜಪೃಷ್ಠಾಕಾರದ ತಲವಿನ್ಯಾಸವಿರುವ ಪ್ರಾಚೀನ ದೇವಾಲಯವೊಂದರ ಅವಶೇಷ ಬೆಳಕಿಗೆ ಬಂದಿದೆ. ಅಧಿಷ್ಠಾನದವರೆಗೆ ಮಾತ್ರ ಉಳಿದಿರುವ ಈ ದೇಗುಲ ಕನಿಷ್ಠ ಮೂರುಸಲ ಪುನರ್ನಿರ್ಮಿತವಾದಂತೆ ಕಂಡು ಬರುತ್ತದೆ. ಮೊದಲಿಗೆ ಜಂಬಿಟ್ಟಿಗೆಯಿಂದ, ನಂತರ ಸುಟ್ಟ ಇಟ್ಟಿಗೆಗಳಿಂದ ಕಟ್ಟಲಾದ ಈ ದೇವಾಲಯಕ್ಕೆ ತರುವಾಯದಲ್ಲಿ ಅಲಂಕೃತ ಶಿಲಾಭಾಗಗಳ ಹೊದಿಕೆಯನ್ನು ನೀಡಿರಬೇಕು. ಶಾಸನಾಧಾರದ ಮೇಲೆ ಈ ಮೂರು ನಿರ್ಮಾಣಕಾರ್ಯಗಳು ಕ್ರಮವಾಗಿ ರಾಷ್ಟ್ರಕೂಟಪೂರ್ವ (ಕದಂಬ ?), ರಾಷ್ಟ್ರಕೂಟ ಹಾಗೂ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಡೆದಿರಬಹುದೆಂದು ಊಹಿಸಬಹುದು.

ಕರ್ನಾಟಕದಲ್ಲಿರುವ ಕೆಲವೇ ಗಜಪೃಷ್ಠಾಕಾರದ ದೇವಾಲಯಗಳಲ್ಲಿ ಒಂದಾಗಿರುವ ಈಸೂರಿನ ಈ ದೇವಾಲಯದ ತಲವಿನ್ಯಾಸ, ಊರ್ಧ್ವವಿನ್ಯಾಸ, ಶಿಲ್ಪಗಳು ಮತ್ತು ಅದೇ ಸ್ಥಳದಲ್ಲಿ ದೊರೆತಿರುವ ಶಾಸನ ಮತ್ತಿತರ ಸಾಂಸ್ಕೃತಿಕ ಅವಶೇಷಗಳ ಸ್ಥೂಲ ವಿವರಣೆಯನ್ನು ಇಲ್ಲಿ ಮೊದಲಬಾರಿಗೆ ಮುಂಡಿಸಲಾಗಿದೆ.

---

* ಸಾರಾಂಶ

ಈ ಸಂಶೋಧನೆಯಿಂದ ಒಟ್ಟಿನಲ್ಲಿ ಎರಡು ಮುಖ್ಯ ಸಂಗತಿಗಳು ಬೆಳಕಿಗೆ ಬಂದಂತಾಗುತ್ತದೆ. ೧ ಈಸೂರಿನ ಐತಿಹಾಸಕ್ಕೆ ಕನಿಷ್ಠ ಕದಂಬರ ಕಾಲದಷ್ಟು ಪ್ರಾಚೀನತೆ ದೊರೆಯುತ್ತದೆ. ಮತ್ತು ೨ ಶತವಾಹನ, ಚುಟು ಕಾಲದಲ್ಲಿ ಕರ್ನಾಟಕದಲ್ಲಿ ನಿರ್ಮಿಸಲಾರಂಭವಾದ ಗಜಪೃಷ್ಠಾಕಾರ ತಲವಿನ್ಯಾಸದ ಮಂದಿರಗಳು ಬಾದಾಮಿ ಚಾಲುಕ್ಯ ಹಾಗೂ ತದನಂತರ ಕರಾವಳಿ ಪ್ರದೇಶದಲ್ಲಿ ಮಾತ್ರ ಹೆಚ್ಚು ಪರಿಚಿತವಾಗಿದ್ದುದರ ಜೊತೆಗೆ ನಡುವಣ ಮಲೆನಾಡು ಪ್ರಾಂತದಲ್ಲಿಯೂ ಕನಿಷ್ಠ ೧೧-೧೨ನೆಯ ಶತಮಾನದವರೆಗೂ ಪ್ರಚಲಿತವಾಗಿದ್ದವು. ಈ ಗಜಪೃಷ್ಠಾಕಾರದ ಇನ್ನೊಂದು ಸುಧಾರಿತ ರೂಪದಲ್ಲಿ ಶೃಂಗೇರಿಯ ವಿದ್ಯಾಶಂಕರ ದೇವಾಲಯದ ದೀರ್ಘವೃತ್ತ ತಲವಿನ್ಯಾಸ ರೂಪುಗೊಂಡಿರುವ ಸಾಧ್ಯತೆ ಇದೆಯೆಂದು ತಿಳಿದುಬರುತ್ತದೆ.